ಎಲೈ ಪ್ರೀತಿಪಾತ್ರನೇ, ನನಗೆ ನಿನ್ನಲ್ಲಿ ದ್ವೇಷವಿಲ್ಲ. ಇದನ್ನು ಸತ್ಯವಾಗಿ ನಿನಗೆ ಹೇಳುತ್ತಿದ್ದೇನೆ. ನಿನ್ನ ತೇಜೋವಧೆಯನ್ನು ಮಾಡುವ ಸಲುವಾಗಿ ನಾನು ಉಗ್ರವಾದ ಮಾತುಗಳನ್ನು ಆಡಿದೆ.

**ಅಕಸ್ಮಾತ್ ಪಾಂಡವಾನ್ ಹಿ ತ್ವಂ ದ್ವಿಷಸೀತಿ ಮತಿರ್ಮಮ ।**
**ಯೇನಾಸಿ ಬಹುಶೋ ರೂಕ್ಷಂ ಚೋದಿತಃ ಸೂರ್ಯನಂದನ ॥೧೧॥**

ನೀನು ನಿಷ್ಕಾರಣವಾಗಿ ಪಾಂಡವರನ್ನು ದ್ವೇಷಿಸುತ್ತಿದ್ದೀಯೆ ಎಂದು ನನ್ನ ಅಭಿಪ್ರಾಯ. ಎಲೈ ಸೂರ್ಯನಂದನನೇ, ಆ ಕಾರಣದಿಂದಾಗಿ ನೀನು ಅನೇಕ ಬಾರಿ ನನ್ನಿಂದ ಉಗ್ರವಾದ ವಚನಗಳನ್ನು ಕೇಳಿದ್ದೀಯೆ.

**ಜಾನಾಮಿ ಸಮರೇ ವೀರ್ಯಂ ಶತ್ರುಭಿರ್ದುಃಸಹಂ ತವ ।**
**ಬ್ರಹ್ಮಣ್ಯತಾಂ ಚ ಶೌರ್ಯಂ ಚ ದಾನೇ ಚ ಪರಮಾಂ ಗತಿಮ್ ॥೧೨॥**

ಶತ್ರುಗಳಿಗೆ ಸಹಿಸಲು ಅಸಾಧ್ಯವಾದ ನಿನ್ನ ಯುದ್ಧಪರಾಕ್ರಮವನ್ನೂ, ಬ್ರಾಹ್ಮಣ ವಾತ್ಸಲ್ಯವನ್ನೂ, ಶೌರ್ಯವನ್ನೂ, ದಾನದಲ್ಲಿ ಪರಮಶ್ರದ್ಧೆಯನ್ನೂ ನಾನು ತಿಳಿದಿದ್ದೇನೆ.

**ನ ತ್ವಯಾ ಸದೃಶಃ ಕಶ್ಚಿತ್ಪುರುಷೇಷ್ವಮರೋಪಮ ।**
**ಕುಲಭೇದಂ ಚ ಮತ್ವಾಹಂ ಸದಾ ಪರುಷಮುಕ್ತವಾನ್ ॥೧೩॥**

ಎಲೈ ದೇವತೆಯಂತೆ ಇರುವವನೇ, ನಿನಗೆ ಸದೃಶನಾದ ಪುರುಷನು ಯಾವನೂ ಇಲ್ಲ. ಕುಲಭೇದವಾಗಬಾರದು ಎಂದು ಚಿಂತಿಸಿ ನಾನು ಯಾವಾಗಲೂ ಕ್ರೂರವಾದ ಮಾತುಗಳನ್ನಾಡಿದೆ.

**ಇಷ್ವಸ್ತ್ರೇ ಭಾರಸಂಧಾನೇ ಲಾಘವೇಽಸ್ತ್ರಬಲೇ ತಥಾ ।**
**ಸದೃಶಃ ಫಲ್ಗುನೇನಾಸಿ ಕೃಷ್ಣೇನ ಚ ಮಹಾತ್ಮನಾ ॥೧೪॥**

ಬಾಣಗಳನ್ನು ಪ್ರಯೋಗಿಸುವುದರಲ್ಲಿಯೂ, ಗುರುತರವಾದ ಕಾರ್ಯವನ್ನು ಮಾಡುವುದರಲ್ಲಿಯೂ, ಕ್ಷಿಪ್ರತೆಯಲ್ಲಿಯೂ, ಅಸ್ತ್ರದ ಬಲದಲ್ಲಿಯೂ ನೀನು ಅರ್ಜುನನಿಗೂ, ಮಹಾತ್ಮನಾದ ಕೃಷ್ಣನಿಗೂ ಸದೃಶನಾಗಿದ್ದೀಯೆ.

**ಕರ್ಣ ಕಾಶಿಪುರಂ ಗತ್ವಾ ತ್ವಯೈಕೇನ ಧನುಷ್ಮತಾ ।**
**ತಸ್ಯಾರ್ಥೇ ಕುರುರಾಜಸ್ಯ ರಾಜಾನೋ ಮೃದಿತಾ ಯುಧಿ ॥೧೫॥**

ಎಲೈ ಕರ್ಣನೇ, ಕುರುರಾಜನಾದ ದುರ್ಯೋಧನನ ಸಲುವಾಗಿ ನೀನು ಧನುರ್ಧಾರಿಯಾಗಿ ಒಬ್ಬನೇ ಕಾಶೀಪಟ್ಟಣಕ್ಕೆ ಹೋಗಿ ಯುದ್ಧದಲ್ಲಿ ಅನೇಕ ರಾಜರನ್ನು ಮರ್ದಿಸಿದೆ.

**ತಥಾ ಚ ಬಲವಾನ್ ರಾಜಾ ಜರಾಸಂಧೋ ದುರಾಸದಃ ।**
**ಸಮರೇ ಸಮರಶ್ಲಾಘೀ ತ್ವಯಾ ನ ಸದೃಶೋಽಭವತ್ ॥೧೬॥**

ಹಾಗೆಯೇ ಯಾರೂ ಸಮೀಪದಲ್ಲಿ ಸುಳಿಯಲು ಅಸಾಧ್ಯನಾದ, ಬಲಿಷ್ಠನಾದ, ಯಾವಾಗಲೂ ಯುದ್ಧವನ್ನು ಪ್ರಶಂಸಿಸುವ ಜರಾಸಂಧರಾಜನೂ ನಿನಗೆ ಸದೃಶನಾಗಲಿಲ್ಲ.

**ಬ್ರಹ್ಮಣ್ಯಃ ಸತ್ಯವಾದೀ ಚ ತೇಜಸಾಽರ್ಕ ಇವಾಪರಃ ।**
**ದೇವಗರ್ಭೋಽಜಿತಃ ಸಂಖೇ ಮನುಷ್ಯೈರಧಿಕೋ ಭುವಿ ॥೧೭॥**

ನೀನು ಬ್ರಾಹ್ಮಣ ವತ್ಸಲನಾದವನು, ಸತ್ಯವಚನನು ಮತ್ತು ದೀಪ್ತಿಯಿಂದ ಇನ್ನೊಬ್ಬ ಸೂರ್ಯನಂತೆ ಇರುವವನು. ದೇವತೆಯಿಂದ ಜನಿಸಿದವನು, ಯುದ್ಧದಲ್ಲಿ ಅಪರಾಜಿತನು ಮತ್ತು ಭೂಮಿಯಲ್ಲಿರುವ ಎಲ್ಲ ಮನುಷ್ಯರಿಗಿಂತಲೂ ಶ್ರೇಷ್ಠನಾದವನು.

**ವ್ಯಪನೀತೋಽದ್ಯ ಮನ್ಯುರ್ಮೇ ಯಸ್ತ್ವಾಂ ಪ್ರತಿ ಪುರಾ ಕೃತಃ ।**
**ದೈವಂ ಪುರುಷಕಾರೇಣ ನ ಶಕ್ಯಮತಿವರ್ತಿತುಮ್ ॥೧೮॥**

ನಿನ್ನ ಮೇಲೆ ನನಗೆ ಹಿಂದೆ ಇದ್ದ ಕೋಪವು ಈ ದಿನ ಹೊರಟುಹೋಗಿದೆ. ದೈವಸಂಕಲ್ಪವನ್ನು ಪುರುಷ ಪ್ರಯತ್ನದಿಂದ ಮೀರಲು ಸಾಧ್ಯವಿಲ್ಲ.

**ಸೋದರ್ಯಾಃ ಪಾಂಡವಾ ವೀರಾ ಭ್ರಾತರಸ್ತೇಽರಿಸೂದನ ।**
**ಸಂಗಚ್ಛ ತೈರ್ಮಹಾಬಾಹೋ ಮಮ ಚೇದಿಚ್ಛಸಿ ಪ್ರಿಯಮ್ ॥೧೯॥**

ಎಲೈ ವೀರನೇ, ಶತ್ರುಸೂದನನೇ, ವೀರರಾದ ಪಾಂಡವರು ನಿನ್ನ ಸಹೋದರರು. ಎಲೈ ಮಹಾಬಾಹುವೇ, ನನಗೆ ನೀನು ಪ್ರಿಯವನ್ನು ಮಾಡಲು ಬಯಸುವುದಾದರೆ ಅವರ ಜೊತೆಯಲ್ಲಿ ಸ್ನೇಹ ಸಮಾಗಮವನ್ನು ಹೊಂದು.

**ಮಯಾ ಭವತು ನಿರ್ವೃತ್ತಂ ವೈರಮಾದಿತ್ಯನಂದನ ।**
**ಪೃಥಿವ್ಯಾಂ ಸರ್ವರಾಜಾನೋ ಭವಂತ್ವದ್ಯ ನಿರಾಮಯಾಃ ॥೨೦॥**

ಎಲೈ ಸೂರ್ಯನಂದನನೇ, ನನ್ನ ಜೊತೆಯಲ್ಲಿಯೇ ಈ ವೈರವು ಕೊನೆಗೊಳ್ಳಲಿ. ಭೂಮಿಯಲ್ಲಿರುವ ಎಲ್ಲ ರಾಜರೂ ಈ ದಿನ ನಿಶ್ಚಿಂತೆಯಿಂದ ಇರಲಿ.

ಕರ್ಣ:

ಜಾನಾಮ್ಯಹಂ ಮಹಾಪ್ರಾಜ್ಞ ಸರ್ವಮೇತನ್ನ ಸಂಶಯಃ ।
ಯಥಾ ವದಸಿ ದುರ್ಧರ್ಷ ಕೌಂತೇಯೋಽಹಂ ನ ಸೂತಜಃ ।
ವಸುದೇವಸುತೋ ಯದ್ವತ್ ಪಾಂಡವಾಯ ದೃಢವ್ರತಃ ॥೨೦॥

ಕರ್ಣ– ಮಹಾಪ್ರಾಜ್ಞರೇ, ಇದೆಲ್ಲವನ್ನೂ ನಾನು ತಿಳಿದಿದ್ದೇನೆ. ಇದರಲ್ಲಿ ಸಂಶಯವಿಲ್ಲ. ಎಲೈ ದುರ್ಧರ್ಷರೇ, ನೀವು ಹೇಳುವಂತೆ ನಾನು ಕುಂತೀಪುತ್ರ, ಸೂತಪುತ್ರನಲ್ಲ. ವಸುದೇವ ಸುತನಾದ ಕೃಷ್ಣನು ಪಾಂಡವರ ಹಿತದಲ್ಲಿ ದೃಢ ದೀಕ್ಷೆಯನ್ನು ಹೊಂದಿದಂತೆ (ನಾನು ದುರ್ಯೋಧನನ ಹಿತದಲ್ಲಿ ದೀಕ್ಷೆಯನ್ನು ಹೊಂದಿದ್ದೇನೆ).

ಅವಕೀರ್ಣಸ್ತ್ವಹಂ ಕುಂತ್ಯಾ ಸೂತೇನ ಚ ವಿವರ್ಧಿತಃ ।
ಭುಕ್ತ್ವಾ ದುರ್ಯೋಧನೈಶ್ವರ್ಯಂ ನ ಮಿಥ್ಯಾ ಕರ್ತುಮುತ್ಸಹೇ ॥೨೧॥

ನಾನು ಕುಂತಿಯಿಂದ ಪರಿತ್ಯಾಗ ಮಾಡಲ್ಪಟ್ಟು ಸೂತನಿಂದ ಬೆಳೆಸಲ್ಪಟ್ಟೆ. ದುರ್ಯೋಧನನ ಐಶ್ವರ್ಯವನ್ನು ಭೋಗಿಸಿ ಈಗ ಅದನ್ನು ಸುಳ್ಳು ಮಾಡಲಾರೆ.

ವಸು ಚೈವ ಶರೀರಂ ಚ ಯದುದಾರಂ ತಥಾ ಯಶಃ ।
ಸರ್ವಂ ದುರ್ಯೋಧನಸ್ಯಾರ್ಥೇ ತ್ಯಕ್ತಂ ಮೇ ಭೂರಿದಕ್ಷಿಣ ॥೨೨॥

ಎಲೈ ಭೂರಿದಕ್ಷಿಣರೇ, ನನ್ನ ಸಂಪತ್ತು, ನನ್ನ ಶರೀರ, ನನ್ನ ಅಪಾರವಾದ ಕೀರ್ತಿ ಎಲ್ಲವನ್ನೂ ನಾನು ದುರ್ಯೋಧನನ ಸಲುವಾಗಿ ತ್ಯಾಗ ಮಾಡಿದ್ದೇನೆ.

ಮಾ ಚೈತದ್ ವ್ಯಾಧಿಮರಣಂ ಕ್ಷತ್ರಂ ಸ್ಯಾದಿತಿ ಕೌರವ ।
ಕೋಪಿತಾಃ ಪಾಂಡವಾ ನಿತ್ಯಂ ಮಯಾಽಽಶ್ರಿತ್ಯ ಸುಯೋಧನಮ್ ॥

ಎಲೈ ಕೌರವರೇ, ಕ್ಷತ್ರಿಯರಿಗೆ ವ್ಯಾಧಿಯಿಂದ ಮರಣವುಂಟಾಗುವುದು ಬೇಡ ಎಂದು ಉದ್ದೇಶಿಸಿ, ನಾನು ಸುಯೋಧನನನ್ನು ಆಶ್ರಯಿಸಿ, ಯಾವಾಗಲೂ ಪಾಂಡವರಿಗೆ ಕೋಪವನ್ನು ಉಂಟುಮಾಡಿದೆ.

ಅವಶ್ಯಭಾವೀ ವೈ ಯೋಽರ್ಥೋ ನ ಸ ಶಕ್ಯೋ ನಿವರ್ತಿತುಮ್ ।
ದೈವಂ ಪುರುಷಕಾರೇಣ ಕೋ ನಿವರ್ತಿತುಮುತ್ಸಹೇತ್ ॥೨೫॥

ಅವಶ್ಯವಾಗಿ ನಡೆಯಲೇಬೇಕಾದ ಕಾರ್ಯವನ್ನು ಬದಲಾಯಿಸಲು ಸಾಧ್ಯವಿಲ್ಲ. ದೈವ ಸಂಕಲ್ಪವನ್ನು ಪುರುಷಪ್ರಯತ್ನದಿಂದ ಯಾವನು ತಡೆದಾನು?

ಪೃಥಿವೀಕ್ಷಯಶಂಸೀನಿ ನಿಮಿತ್ತಾನಿ ಪಿತಾಮಹ ।
ಭವದ್ಭಿರುಪಲಬ್ಧಾನಿ ಕಥಿತಾನಿ ಚ ಸಂಸದಿ ॥೨೬॥

ಎಲೈ ಪಿತಾಮಹರೇ, ಪೃಥಿವಿಯ ಕ್ಷಯವನ್ನು ಸೂಚಿಸುವ ಅಪಶಕುನಗಳನ್ನು ನೀವು ನೋಡಿದ್ದೀರಿ ಮತ್ತು ಸಭೆಯಲ್ಲಿ ಹೇಳಿದ್ದೀರಿ.

ಪಾಂಡವಾ ವಾಸುದೇವಶ್ಚ ವಿದಿತಾ ಮಮ ಸರ್ವಶಃ ।
ಅಜೇಯಾಃ ಪುರುಷೈರನ್ಯೈರಿತಿ ತಾಂಶ್ಚೋತ್ಸಹಾಮಹೇ ॥೨೭॥

ಪಾಂಡವರನ್ನು ಮತ್ತು ಕೃಷ್ಣನನ್ನು ನಾನು ಎಲ್ಲ ರೀತಿಯಿಂದಲೂ ತಿಳಿದಿದ್ದೇನೆ. ಅವರು ಬೇರೆ ಯಾವ ಪುರುಷರಿಂದಲೂ ಅಜೇಯರು ಎಂದು ತಿಳಿದೂ ಅವರ ಜೊತೆಯಲ್ಲಿ ಯುದ್ಧವನ್ನು ಮಾಡಲು ಬಯಸುತ್ತೇನೆ.

ವಿಜಯಿಷ್ಯೇ ರಣೇ ಪಾಂಡೂನಿತಿ ಮೇ ನಿಶ್ಚಿತಂ ಮನಃ ।
ನ ಚೇಚ್ಛಕ್ಯಮವಸ್ರಷ್ಟುಂ ವೈರಮೇತತ್ ಸುದಾರುಣಮ್ ।
ಧನಂಜಯೇನ ಯೋತ್ಸ್ಯೇಽಹಂ ಸ್ವಧರ್ಮಪ್ರೀತಿಮಾನಸಃ ॥೨೮॥

ಪಾಂಡವರನ್ನು ಯುದ್ಧದಲ್ಲಿ ಗೆಲ್ಲುವೆನು, ಇದು ನನ್ನ ನಿಶ್ಚಿತವಾದ ಅಭಿಪ್ರಾಯ. ಈ ಘೋರವಾದ ವೈರವನ್ನು ಪರಿತ್ಯಾಗ ಮಾಡುವುದು ಅಶಕ್ಯವಾದರೆ ನಾನು ನನ್ನ ಕ್ಷತ್ರಿಯಧರ್ಮದಲ್ಲಿಯೇ ಪ್ರೀತಿಯುಳ್ಳ ಮನಸ್ಸಿನಿಂದ ಅರ್ಜುನನ ಜೊತೆಯಲ್ಲಿ ಯುದ್ಧ ಮಾಡುವೆನು.

ಅನುಜಾನೀಷ್ವ ಮಾಂ ತಾತ ಯುದ್ಧೇ ಪ್ರೀತಮನಾಃ ಸದಾ ।
ಅನುಜ್ಞಾತಸ್ತ್ವಯಾ ವೀರ ಯುಧ್ಯೇಯಮಿತಿ ಮೇ ಮತಿಃ ॥೨೯॥

ಯುದ್ಧದಲ್ಲಿ ಯಾವಾಗಲೂ ಪ್ರೀತಿಯುಳ್ಳ ತಂದೆಯೇ, ನನಗೆ ಅನುಮತಿಯನ್ನು ನೀಡಿ. ಎಲೈ ವೀರರೇ, ನಿಮ್ಮಿಂದ ಅನುಮತಿಯನ್ನು ಪಡೆದು ಯುದ್ಧವನ್ನು ಮಾಡುವೆನು ಎಂದು ನನ್ನ ಅಭಿಪ್ರಾಯ.

ದುರುಕ್ತಂ ವಿಪ್ರತೀಪಂ ವಾ ಸಂರಂಭಾಚ್ಚಾಪಲಾತ್ ತಥಾ ।
ಯನ್ಮಯಾಽಪಕೃತಂ ಕಿಂಚಿತ್ ತದನುಕ್ಷಂತುಮರ್ಹಸಿ ॥೩೦॥

ನಾನು ಕೋಪದಿಂದ ಅಥವಾ ಚಾಪಲ್ಯದಿಂದ ಯಾವ ಕೆಟ್ಟ ಮಾತುಗಳನ್ನು, ವಿರೋಧ ಮಾತುಗಳನ್ನು ಆಡಿ ಸ್ವಲ್ಪ ಅಪಕಾರವನ್ನು ಮಾಡಿದ್ದೇನೆಯೋ ಅದನ್ನು ನೀವು ಕ್ಷಮಿಸಬೇಕು.

ಭೀಷ್ಮಃ

ನ ಚೇಚ್ಛಕ್ಯಮಥೋತ್ಸ್ರಷ್ಟುಂ ವೈರಮೇತತ್ಸುದಾರುಣಮ್ ।
ಅನುಜಾನಾಮಿ ಕರ್ಣ ತ್ವಾಂ ಯುಧ್ಯಸ್ವ ಸ್ವರ್ಗಕಾಮ್ಯಯಾ ॥೩೧॥

ಭೀಷ್ಮ- ಎಲೈ ಕರ್ಣನೇ, ಈ ದಾರುಣವಾದ ವೈರವನ್ನು ಪರಿತ್ಯಾಗ ಮಾಡುವುದು ಅಶಕ್ಯವಾದರೆ ನಿನಗೆ ಅನುಮತಿಯನ್ನು ನೀಡುತ್ತಿದ್ದೇನೆ. ಸ್ವರ್ಗವನ್ನು ಬಯಸಿ ಯುದ್ಧವನ್ನು ಮಾಡು.

ವಿಮನ್ಯುರ್ಗತಸಂರಂಭಃ ಕುರು ಕರ್ಮ ನೃಪಸ್ಯ ಹಿ ।
ಯಥಾಶಕ್ತಿ ಯಥೋತ್ಸಾಹಂ ಸತಾಂ ವೃತ್ತೇಷು ವೃತ್ತವಾನ್ ॥೩೨॥

ಕ್ರೋಧವನ್ನು ತಡೆದು, ನಿನ್ನ ಶಕ್ತಿಗೆ ಮತ್ತು ಉತ್ಸಾಹಕ್ಕೆ ಅನುಗುಣವಾಗಿ ಸಜ್ಜನರ ಮಾರ್ಗದಲ್ಲಿ ನಡೆಯುತ್ತಾ ದುರ್ಯೋಧನನಿಗೆ ಉಪಕಾರವನ್ನು ಮಾಡು.

ಅಹಂ ತ್ವಾಮನುಜಾನಾಮಿ ಯದಿಚ್ಛಸಿ ತದಾಪ್ನುಹಿ ।
ಕ್ಷತ್ರಧರ್ಮಜಿತಾನ್ ಲೋಕಾನ್ ಸಂಪ್ರಾಪ್ಸ್ಯಸಿ ನ ಸಂಶಯಃ ॥೩೩॥

ನಾನು ನಿನಗೆ ಅನುಮತಿಯನ್ನು ನೀಡುತ್ತಿದ್ದೇನೆ. ನೀನು ಏನನ್ನು ಬಯಸುತ್ತೀಯೋ ಅದನ್ನು ಪಡೆಯುವವನಾಗು. ನೀನು ಕ್ಷತ್ರಿಯಧರ್ಮದಿಂದ ಸಂಪಾದಿಸಿದ ಲೋಕಗಳನ್ನು ಹೊಂದುವೆ, ಇದರಲ್ಲಿ ಸಂಶಯವಿಲ್ಲ.

ಯುಧ್ಯಸ್ವ ನಿರಹಂಕಾರೋ ಬಲವೀರ್ಯವ್ಯಪಾಶ್ರಯಃ ।
ಧರ್ಮ್ಯಾದ್ಧಿ ಯುದ್ಧಾತ್ ಶ್ರೇಯೋಽನ್ಯತ್ ಕ್ಷತ್ರಿಯಸ್ಯ ನ ವಿದ್ಯತೇ ॥

ಅಹಂಕಾರವನ್ನು ತೊರೆದು, ನಿನ್ನ ಬಲ-ವೀರ್ಯಗಳನ್ನು ಅವಲಂಬಿಸಿ ಯುದ್ಧವನ್ನು ಮಾಡು. ಕ್ಷತ್ರಿಯನಿಗೆ ಯುದ್ಧಕ್ಕಿಂತ ದೊಡ್ಡದಾದ ಶ್ರೇಯಸ್ಕರವಾದ ಧರ್ಮವು ಇನ್ನೊಂದು ಇರುವುದಿಲ್ಲ.

ಪ್ರಶಮೇ ಹಿ ಕೃತೋ ಯತ್ನಃ ಸುಚಿರಾತ್ ಸುಚಿರಂ ಮಯಾ ।
ನ ಚೈವ ಶಕ್ಿತಃ ಕರ್ತುಂ ಯತೋ ಧರ್ಮಸ್ತತೋ ಜಯಃ ॥೩೫॥

ನಾನು ಬಹಳ ಬಹಳ ಸಮಯದವರೆಗೆ ಸಂಧಿಗಾಗಿ ಪ್ರಯತ್ನವನ್ನು ಮಾಡಿದೆ. ಆದರೆ ಅದು ನನ್ನಿಂದ ಸಾಧ್ಯವಾಗಲಿಲ್ಲ. ಎಲ್ಲಿ ಧರ್ಮವಿದೆಯೋ ಅಲ್ಲಿ ಜಯವಿದೆ.

ಸಂಜಯಃ

ಏವಂ ಬ್ರುವಂತಂ ಗಾಂಗೇಯಮಭಿವಾದ್ಯ ಪ್ರಸಾದ್ಯ ಚ ।
ರಾಧೇಯೋ ರಥಮಾರುಹ್ಯ ಪ್ರಾಯಾತ್ ತವ ಸುತಂ ಪ್ರತಿ ॥೩೬॥

ಹೀಗೆ ಮಾತನಾಡಿದ ಭೀಷ್ಮರನ್ನು ಕರ್ಣನು ನಮಸ್ಕರಿಸಿ, ಪ್ರಸನ್ನಗೊಳಿಸಿ, ರಥವನ್ನೇರಿ ನಿನ್ನ ಪುತ್ರನ ಬಳಿಗೆ ಹೊರಟನು.

॥ ಇತಿ ಶ್ರೀಮನ್ಮಹಾಭಾರತೇ ಶತಸಹಸ್ರಿಕಾಯಾಂ ಸಂಹಿತಾಯಾಂ ವೈಯಾಸಿಕ್ಯಾಂ
ಭೀಷ್ಮಪರ್ವಣಿ ಏಕೋನವಿಂಶಾಧಿಕಶತತಮೋಽಧ್ಯಾಯಃ ॥

॥ ಭೀಷ್ಮವಧಪರ್ವಣಿ ಏಕೋನಾಶೀತಿತಮೋಽಧ್ಯಾಯಃ ॥

ಇಲ್ಲಿಗೆ ಮಹಾಭಾರತದ ಭೀಷ್ಮಪರ್ವದಲ್ಲಿ ನೂರ ಹತ್ತೊಂಬತ್ತನೆಯ
ಅಧ್ಯಾಯ ಮುಗಿಯಿತು.

**॥ಸಮಾಪ್ತಂ ಭೀಷ್ಮವಧಪರ್ವ ॥**

**॥ ಸಮಾಪ್ತಂ ಭೀಷ್ಮಪರ್ವ ॥**

॥ಶ್ರೀಮಧ್ವೇಶಾರ್ಪಣಮಸ್ತು ॥

★ ★ ★ ★ ★